ಡಿಸೆಂಬರ್ – 2021

WCG
Wildlife Conservation Group

## ಲೇಖನಗಳು




**ವಿನ್ಯಾಸ**

ಧನರಾಜ್ ಎಂ.

**ಮುಖಪುಟ ಛಾಯಾಚಿತ್ರ**

ಹಯಾತ್ ಮೊಹಮ್ಮದ್

**ಪರಿಷ್ಕರಣೆ**

ಮುರಳಿ ಎಸ್.

ಡಾ. ಮಧುಸೂಧನ ಹೆಚ್. ಸಿ.

**ಕರಡು ತಿದ್ದುಪಡಿ**

ಡಾ.ದೀಪಕ್ ಭ., ಮೈಸೂರು




# ಪುರಗಿ

**ಸಾಮಾನ್ಯ ಹೆಸರು : Jackel jujube**

**ವೈಜ್ಞಾನಿಕ ಹೆಸರು : *Zizipus oenopolia***



© ದೀಪಕ್ ಜಿ. ಎನ್. **ಪುರಗಿ ಗಿಡ, ಬನ್ನೇರುಘಟ್ಟ ರಾಷ್ಟ್ರೀಯ ಉದ್ಯಾನವನ**

ಸುಂಡ್ಲಿ ಗಿಡ, ಪುರಗಿ ಗಿಡ, ಕನ್ನರಿ ಎಂದು ಸಾಮಾನ್ಯವಾಗಿ ಕರೆಯಲ್ಪಡುವ ಈ ಗಿಡವು ಭಾರತ, ಚೀನಾ, ಮತ್ತು ಆಸ್ಟ್ರೇಲಿಯಾ ಮೊದಲಾದ ದೇಶಗಳಲ್ಲಿನ ಕುರುಚಲು ಕಾಡುಗಳಲ್ಲಿ ಕಂಡುಬರುತ್ತವೆ. ಸುಮಾರು 1.5 ಮೀಟರ್ ಎತ್ತರಕ್ಕೆ ಬೆಳೆಯುವ ಈ ಗಿಡದ ರೆಂಬೆಗಳು ಮುಳ್ಳುಗಳಿಂದ ಕೂಡಿದ್ದು ಪರ್ಯಾಯ ಸರಳ ಎಲೆ ವಿನ್ಯಾಸವನ್ನು ಹೊಂದಿದೆ. ಇದರ ಹೂಗಳು ಹಸಿರು ಬಣ್ಣದಲ್ಲಿರುತ್ತವೆ  ಹಾಗೂ ಹೊಳೆಯುವ ಹಣ್ಣುಗಳು ಕಪ್ಪುಬಣ್ಣದಿಂದ ಕೂಡಿರುತ್ತವೆ. ಹಳ್ಳಿಗಾಡಿನಲ್ಲಿ ಬೆಳೆದ ಬಹುತೇಕ ಜನರು ಈ ಹಣ್ಣಿನ ರುಚಿಯನ್ನು ಸವಿದಿರುತ್ತಾರೆ. ಈ ಗಿಡದ ಬೇರುಗಳನ್ನು ನಂಜು ನಿರೋಧಕ ಮತ್ತು ಹೊಟ್ಟೆಯಲ್ಲಿ ಉರಿ ಮೊದಲಾದವುಗಳಿಗೆ ಆಯುರ್ವೇದ ಔಷಧಿಯಾಗಿ ಬಳಸುತ್ತಾರೆ. ಮಹಾರಾಷ್ಟ್ರದ ಕೊಂಕಣಿ ಜನಾಂಗವು ಈ ಗಿಡದ ಎಲೆಗಳನ್ನು ರುಬ್ಬಿ ಗಾಯಗಳಿಗೆ ಹಚ್ಚುತ್ತಾರೆ.




# ಮಣ್ಣಿನಿಂದ ಮನೆ ಕಟ್ಟಿಕೊಂಡು ವಾಸಿಸುವ ಪಕ್ಷಿ ರೂಫಸ್ ಹಾರ್ನೆರೋ

ಭೂಮಿಯ ಜೀವ ವೈವಿಧ್ಯವು ಅತ್ಯಂತ ಕೌತುಕಮಯ ಹಾಗೂ ಅದ್ಭುತಗಳಿಂದ ಕೂಡಿದೆ. ಜೀವರಾಶಿಗಳ ಪೈಕಿ ಮಣ್ಣಿನಿಂದ ಮನೆಯನ್ನು ಕಟ್ಟಿಕೊಂಡು ಕೆಲವೇ ಕೆಲವು ಜೀವಿಗಳು ಜೀವಿಸುತ್ತವೆ. ಆದರೆ ಒಂದು ಪಕ್ಷಿಯೂ ಮಣ್ಣಿನಿಂದ ತನಗೆ ಅಗತ್ಯವಿರುವ ಆಕಾರದ ಮತ್ತು ಒಂದು ನಿರ್ದಿಷ್ಟವಾದ ಗಾತ್ರದ ಮನೆಯನ್ನು ಮರದ ಮೇಲೆ ಕಟ್ಟಿಕೊಂಡು ಅದರಲ್ಲಿ ಜೀವಿಸುತ್ತದೆಯೆಂದರೆ ನಂಬುತ್ತೀರಾ? ಹೌದು ನಂಬಲೇ ಬೇಕು. ಇಲ್ಲೊಂದು ಪಕ್ಷಿಯಿದ್ದು, ಇದು ಮರದ ಮೇಲ್ಭಾಗದಲ್ಲಿ ಮಳೆ ಗಾಳಿಗೂ ಅಂಜದೇ ಸದೃಢವಾದ ಮಣ್ಣಿನ ಮನೆಯನ್ನು ಕಟ್ಟಿಕೊಂಡು ವಾಸಿಸುತ್ತದೆ. ಅದುವೇ 'ರೂಫಸ್ ಹಾರ್ನೆರೋ ಪಕ್ಷಿ' (ಫರ್ನೇರಿಯಸ್ ರುಫುಸ್). ಇದು 'ಫರ್ನಾರಿಡೆ' ಪ್ರಭೇದದ ಮಧ್ಯಮ ಗಾತ್ರದ ಪಕ್ಷಿಯಾಗಿದೆ. ಫರ್ನೇರಿಯಸ್ ಲ್ಯಾಟಿನ್ ಭಾಷೆಯಿಂದ ಬಂದಿದ್ದು, ಇದರರ್ಥ 'ಓವನ್' ಅಥವಾ ಒಲೆ ಎಂದು. ಇವುಗಳು ಹೆಚ್ಚಾಗಿ ಪೂರ್ವ ದಕ್ಷಿಣ ಅಮೆರಿಕಾದಲ್ಲಿ ವಾಸಿಸುತ್ತವೆ. ಇದು ಅರ್ಜೆಂಟೀನಾ ಹಾಗು ಉರುಗ್ವೆ ದೇಶಗಳ ರಾಷ್ಟ್ರಪಕ್ಷಿಯೂ ಆಗಿದ್ದು, ಇದನ್ನು 'ಕೆಂಪು ಓವನ್ಬರ್ಡ್' ಎಂದು ಕರೆಯಲಾಗುತ್ತದೆ. ಗಂಡು ಮತ್ತು ಹೆಣ್ಣು ಪಕ್ಷಿಗಳು ಜೊತೆಯಾಗಿಯೇ ಜೀವಿಸುವುದರಿಂದ ಸವನ್ನಾ ಹುಲ್ಲುಗಾವಲು, ಕುರುಚಲು ಕಾಡು, ಹುಲ್ಲುಗಾವಲು ಪ್ರದೇಶಗಳಲ್ಲಿ ಮತ್ತು ಕೃಷಿ ಭೂಮಿಗಳಲ್ಲಿ ಹೆಚ್ಚಾಗಿ ವಾಸಿಸುತ್ತವೆ.




ರೂಫಸ್ ಹಾರ್ನೆರೋ ಪಕ್ಷಿಯು, ಆಗ್ನೇಯ ಮತ್ತು ದಕ್ಷಿಣ ಬ್ರೆಜಿಲ್, ಬೊಲಿವಿಯಾ, ಪರುಗ್ವೆ, ಉರುಗ್ವೆ, ಉತ್ತರ ಹಾಗೂ ಮಧ್ಯ ಅರ್ಜೆಂಟೀನಾ ದೇಶಗಳಲ್ಲೂ ಕಾಣಸಿಗುತ್ತವೆ. ಈ ಪಕ್ಷಿಯು ಚೌಕಾಕಾರದ ಬಾಲ ಮತ್ತು ಕೊಳೆತಂತೆ ಕಾಣಿಸುವ ಕೊಕ್ಕನ್ನು ಹೊಂದಿದೆ. ಇದರ ಪುಕ್ಕಗಳು ಕೆಂಪು ಮಿಶ್ರಿತ ಕಂದು ಬಣ್ಣದ್ದಾಗಿದ್ದು, ತಿಳಿ ಕಂದು ಬಣ್ಣದ ತಲೆ ಹಾಗೂ ಬಿಳಿ ಗಂಟಲನ್ನು ಹೊಂದಿರುತ್ತದೆ. ಗಂಡು ಮತ್ತು ಹೆಣ್ಣು ರೂಫಸ್ ಹಾರ್ನೆರೋ ಪಕ್ಷಿಗಳು ರೂಪದಲ್ಲಿ ನೋಡಲು ಸಾಮಾನ್ಯವಾಗಿ ಒಂದೇ ರೀತಿಯಿದ್ದು, ಇವು ಮಣ್ಣಿನಲ್ಲಿರುವ ಕೀಟ ಮತ್ತು ಸಂಧಿಪದಿಗಳನ್ನು ಹುಡುಕಿ ಹೆಕ್ಕಿ ತಿನ್ನುವುದರೊಂದಿಗೆ ಅಪರೂಪಕ್ಕೆ ಧಾನ್ಯಗಳನ್ನೂ ತಿನ್ನುತ್ತವೆ.

ರೂಫಸ್ ಹಾರ್ನೆರೋ ಪಕ್ಷಿಗಳ ಕೂಗುವಿಕೆಯು ಗಂಡು ಮತ್ತು ಹೆಣ್ಣು ಪಕ್ಷಿಗಳಲ್ಲಿ ವಿಭಿನ್ನವಾಗಿರುತ್ತದೆ. ಗಂಡು ಪಕ್ಷಿಗಳು ನಿರಂತರವಾಗಿ ಕೂಗುತ್ತಾ, ಕೂಗಿಗೆ ಅನುಗುಣವಾಗಿ ತಮ್ಮ ಬಾಲಗಳನ್ನು ಮೇಲೆ ಕೆಳಗೆ ಬಡಿಯುವ ಮೂಲಕ ಹೆಣ್ಣು ಪಕ್ಷಿಯನ್ನು ಆಕರ್ಷಿಸುತ್ತವೆ. ಹೆಣ್ಣು ಪಕ್ಷಿಯ ಕಲರವ ತೀರಾ ನಿಧಾನವಾಗಿದ್ದು, ಪಕ್ಷಿಯು ಕೂಗುವ ಮತ್ತು ಬಾಲವನ್ನು ಬಡಿಯುವ ವೇಗದಿಂದ ಗಂಡು ಮತ್ತು ಹೆಣ್ಣು ಪಕ್ಷಿಗಳು ಯಾವುದೆಂದು ಗುರುತಿಸಬಹುದು. ಗಿಡುಗಗಳು, ಸಣ್ಣ ಸಸ್ತನಿಗಳು, ಕಾಡು ಬೆಕ್ಕುಗಳು ಮತ್ತು ಹಲವಾರು ಜಾತಿಯ ಹಾವುಗಳು ಮತ್ತು ದೊಡ್ಡ ಗಾತ್ರದ ಹಲ್ಲಿಗಳು ಈ ಪಕ್ಷಿಗಳನ್ನು ಬೇಟೆಯಾಡುತ್ತವೆ. ಆದರೂ ಈ ಪಕ್ಷಿಗಳು ಮುಚ್ಚಿದ ಗೂಡಿನಲ್ಲಿ ವಾಸಿಸುವುದರಿಂದ ಇವುಗಳಿಗೆ ಪರಭಕ್ಷಕಗಳಿಂದ ಅಪಾಯ ತಕ್ಕಮಟ್ಟಿಗೆ ಕಡಿಮೆ.




ಹೆಣ್ಣು ಪಕ್ಷಿಯು ಆಗಸ್ಟ್ ಮತ್ತು ಡಿಸೆಂಬರ್ ತಿಂಗಳಿನಲ್ಲಿ ಮೊಟ್ಟೆಯಿಡುವುದರಿಂದ ಮೊಟ್ಟೆಯಿಡುವ ಪೂರ್ವದಲ್ಲಿ ಗಂಡು ಮತ್ತು ಹೆಣ್ಣು ಹಾರ್ನೆರೋ ಪಕ್ಷಿಗಳು ಎರಡೂ ಸೇರಿ ಮಣ್ಣಿನಿಂದ ಗೂಡನ್ನು ಕಟ್ಟುತ್ತವೆ. ಇದೇ ಗೂಡಿನೊಳಗೆ ಹೆಣ್ಣು ಪಕ್ಷಿಯು ಮೊಟ್ಟೆಯಿಟ್ಟು ಅದಕ್ಕೆ ಕಾವು ಕೊಟ್ಟು ಮರಿ ಮಾಡಿ, ಮರಿಗಳನ್ನು ಇದೇ ಗೂಡಿನಲ್ಲಿ ಬೆಳೆಸುತ್ತವೆ. ಮರಿಗಳು ತಾಯಿಯ ಮುಂದಿನ ಸಂತಾನೋತ್ಪತ್ತಿಯ ಅವಧಿಯವರೆಗೂ ಇದೇ ಗೂಡಿನಲ್ಲಿ ಉಳಿಯುತ್ತವೆ. ಗಂಡು ಹಾರ್ನೆರೋ ಒಂದೇ ಹೆಣ್ಣು ಪಕ್ಷಿಯೊಂದಿಗೆ ದೀರ್ಘಕಾಲಿಕವಾಗಿ ಬದುಕುವ ಮೂಲಕ ಏಕ ಪತ್ನಿತ್ವ ಪದ್ಧತಿಗೆ ಒತ್ತು ನೀಡುತ್ತದೆ.

ಹೆಣ್ಣು ಪಕ್ಷಿಯು ಒಮ್ಮೆಗೆ ಎರಡರಿಂದ ಮೂರು ಮೊಟ್ಟೆಗಳನ್ನಿಟ್ಟು, ನಂತರ ಹೆಣ್ಣು ಮತ್ತು ಗಂಡು ಪಕ್ಷಿಗಳು 14–18 ದಿನಗಳ ಕಾಲ ಮೊಟ್ಟೆಗಳಿಗೆ ಕಾವುಕೊಡುತ್ತವೆ. ಗಂಡು ಪಕ್ಷಿಯು ಆಹಾರವನ್ನು ತಂದು ತಾಯಿ ಪಕ್ಷಿಗೆ ನೀಡುತ್ತದೆ. ತಾಯಿ ಪಕ್ಷಿಯು ಮರಿಗಳಿಗೆ 23 ರಿಂದ 26 ದಿನಗಳವರೆಗೆ ಆಹಾರವನ್ನು ತನ್ನ ಕೊಕ್ಕಿನಿಂದಲೇ ತಿನ್ನಿಸುತ್ತದೆ. ಹಾರಾಡಲು ಕಲಿತ ಮರಿಗಳು ಮುಂದಿನ ಆರು ತಿಂಗಳುಗಳವರೆಗೆ ಅಥವಾ ತಾಯಿಯು ಮುಂದಿನ ಸಂತಾನೋತ್ಪತ್ತಿಗೆ ಸಿದ್ಧಗೊಳ್ಳುವವರೆಗೂ ಅದೇ ಗೂಡಲ್ಲಿದ್ದು, ನಂತರ ಇವುಗಳು ಹೆತ್ತವರಿಂದ ಪ್ರತ್ಯೇಕಗೊಳ್ಳುತ್ತವೆ. ಇವುಗಳು ಮುಂದಿನ ಸಂತಾನೋತ್ಪತ್ತಿಗೂ ತನ್ನ ಹಳೆಯ ಗೂಡನ್ನೇ ಮರುಬಳಕೆ ಮಾಡಿದರೆ, ಗೂಡುಗಳನ್ನು ರಿಪೇರಿ ಮಾಡಿ ನವೀಕರಿಸಿಕೊಳ್ಳುವುದು ಇವುಗಳ ವಿಶೇಷತೆ. ಇವುಗಳು ಜನವಸತಿ ಇರುವ ಉಪನಗರಗಳಲ್ಲೂ ಗೂಡುಕಟ್ಟಿಕೊಂಡು ವಾಸಿಸುತ್ತವೆ. ಈ ಪಕ್ಷಿಗಳು ಗೂಡುಬಿಟ್ಟು ಹೋದ ನಂತರ ಈ ಗೂಡುಗಳನ್ನು ಇತರ ಸಣ್ಣಪುಟ್ಟ ಪಕ್ಷಿಗಳು ವಾಸಿಸಲು ಬಳಸುವುದೂ ಇದೆ. ಇವುಗಳು ಮನುಷ್ಯನ ಜೀವನದೊಂದಿಗೆ ಸಮಾನಾಂತರವಾಗಿಯೂ ಜೀವಿಸುತ್ತವೆ.

ಈ ರೂಫಸ್ ಹಾರ್ನೆರೋ ಪಕ್ಷಿಯು 7 ರಿಂದ 8 ಇಂಚು ಉದ್ದವಿದ್ದು, 31 ರಿಂದ 58 ಗ್ರಾಂ ತೂಗುತ್ತದೆ. ಗಂಡು ಪಕ್ಷಿಯು ಹೆಣ್ಣಿಗಿಂತ ಹೆಚ್ಚು ಭಾರವಾಗಿದ್ದು, ಕೀಟಗಳನ್ನು ತಿನ್ನುವುದಕ್ಕೆ 2.5 ಸೆಂ.ಮೀ ಉದ್ದದ ಚೂಪಾದ ಕೊಕ್ಕನ್ನು ಹೊಂದಿರುತ್ತದೆ. ರೆಕ್ಕೆಗಳ ಉದ್ದವು 10.2 ಸೆಂ.ಮೀ ಮತ್ತು ಬಾಲವು 7.1 ಸೆಂ.ಮೀ ಉದ್ದವಿದ್ದು, ಇದರ ರೆಕ್ಕೆಗಳು ಮಸುಕಾದ ಕಂದು ಬಣ್ಣದ್ದಾಗಿರುತ್ತದೆ.




ಈ ಪಕ್ಷಿಗಳು ತಮ್ಮ ಸಂಸಾರಕ್ಕಾಗಿ ಮಣ್ಣಿನಿಂದ ಗೂಡು ಕಟ್ಟುವುದು ಇವುಗಳ ವೈಶಿಷ್ಟ್ಯತೆ. ಮರದ ಮೇಲೆ, ದೂರವಾಣಿ ಕಂಬಗಳು ಮತ್ತು ಕಟ್ಟಡಗಳ ಗೋಡೆಗಳಲ್ಲಿ ಜೇಡಿಮಣ್ಣಿನಿಂದ ಒಲೆಯಂತಹ (ಓವನ್) ದಪ್ಪದಾದ ಗೂಡನ್ನು ಕಟ್ಟುತ್ತವೆ. ಇವುಗಳು ಕೇವಲ ಎರಡೇ ವಾರಗಳಲ್ಲಿ 4.5 ಕಿಲೋ ತೂಕದ ಹಸಿ ಮಣ್ಣಿಗೆ ಹುಲ್ಲನ್ನು ಸೇರಿಸಿ ಮಿಶ್ರಣ ಮಾಡಿ ಸರಿ ಸುಮಾರು ಎರಡು ಸಾವಿರ ಉಂಡೆಗಳಾಗಿ ಪರಿವರ್ತಿಸುತ್ತವೆ. ಈ ಉಂಡೆಗಳನ್ನು ಮರದ ಮೇಲೆ ಅಥವಾ ಮನೆಯ ಛಾವಣಿಯ ಮೇಲೆ ತಂದು ಹದ ಮಾಡಿ ಗಟ್ಟಿಮುಟ್ಟಾದ ಗುಮ್ಮಟದಂತಹ ಮನೆಯನ್ನು ಕುಂಬಾರನ ಕೌಶಲಕ್ಕೆ ಸಮಾನವಾಗಿ ಕಟ್ಟುತ್ತವೆ. ಮಣ್ಣಿನ ಒಲೆಯಂತಹ ರಚನೆಯನ್ನು ಮಾಡಿ ಒಳಗೆ ಹೋಗಲು ಮತ್ತು ಹೊರಬರಲು ಅಗತ್ಯವಿರುವಷ್ಟೇ ಸಣ್ಣ ರಂಧ್ರವನ್ನು ಬಿಟ್ಟು ಉಳಿದೆಡೆ ಪೂರ್ತಿಯಾಗಿ ಮುಚ್ಚುತ್ತವೆ. ಈ ಗೂಡಿನ ಬಾಗಿಲು ಹೊರಗಡೆಗೆ ಕಾಣಿಸುವಂತಿರದೇ ಗುಪ್ತವಾಗಿರುವುದರಿಂದ ಈ ಪಕ್ಷಿಗಳ ಶತ್ರುಗಳು ಇವುಗಳ ಮೊಟ್ಟೆ, ಮರಿಗಳನ್ನು ಕದಿಯಲು ಸುಲಭವಾಗಿ ಗೂಡಿಗೆ ಪ್ರವೇಶಿಸಲಾಗುವುದಿಲ್ಲ.

ಈ ಪಕ್ಷಿಗಳು ಗೂಡು ಕಟ್ಟುವಾಗ ಕೊಂಬೆಯ ಮೇಲೆ ನೇರವಾಗಿ ಕಟ್ಟದೇ, ಮಣ್ಣಿನ ಉಂಡೆಗಳನ್ನು ಸೇರಿಸುವಾಗ ಗುಮ್ಮಟದ ಮೇಲ್ಛಾವಣಿಯು ಒಳಮುಖವಾಗಿ ವಕ್ರವಾಗಿರುವುದರಿಂದ ಗೂಡುಗಳು ಕುಸಿಯುವ ಅಪಾಯ ಕಡಿಮೆ. ಪಕ್ಷಿಗಳು ಮನೆಯ ಛಾವಣಿಯ ಕಡೆಗೆ ಮುಕ್ಕಾಲು ಭಾಗದಷ್ಟು ಬಾಗಿದ ಆಂತರಿಕ ಗೋಡೆಯನ್ನು ನಿರ್ಮಿಸಿ, ಬಾಗಿಲು ಮತ್ತು ಗೂಡಿನ ಕುಹರದ (Ventricle) ನಡುವೆ ಪ್ರವೇಶ ಕೋಣೆಯನ್ನು ರಚಿಸುತ್ತವೆ. ಪರೋಕ್ಷವಾದ ಪ್ರವೇಶದ್ವಾರದಿಂದಾಗಿ ತನ್ನ ಶತ್ರುಗಳು ನೇರವಾಗಿ ಗೂಡಿನೊಳಗೆ ಪ್ರವೇಶಿಸಲು ಅಸಾಧ್ಯವಾಗುತ್ತದೆ. ಪ್ರವೇಶ ದ್ವಾರದ ನಯವಾದ ಕಾಂಕ್ರೀಟ್ನಂತಹ ಒಣಗಿದ ಮಣ್ಣು ಶತ್ರುಗಳನ್ನು ದಾಳಿಯಿಂದ ಹಿಮ್ಮೆಟ್ಟಿಸುತ್ತದೆ. ಇವುಗಳು ಬಹುಮಹಡಿಯ ಗೂಡುಗಳನ್ನೂ ತನ್ನ ಅಗತ್ಯತೆಗನುಗುಣವಾಗಿ ಕಟ್ಟುತ್ತವೆ.




**ಲೇಖನ:** **ಸಂತೋಷ್ ರಾವ್ ಪೆರ್ಮುಡ**

**ದಕ್ಷಿಣ ಕನ್ನಡ ಜಿಲ್ಲೆ**



# ಹಾಕಿ ಚಿಟ್ಟೆಯ ಸುತ್ತ ನನ್ನ ಚಿತ್ತ...

ಹೀಗೆ ಒಂದು ದಿನ ಬೆಳಿಗ್ಗೆ ಬೇಗ ಎದ್ದು ಎಂದಿನಂತೆ ನಾನು ನಮ್ಮ ಪಕ್ಕದ ಊರಿನ ಮಳೂರು ಕೆರೆಗೆ ಪಕ್ಷಿ ವೀಕ್ಷಣೆಗೆಂದು ಹೊರಟೆ. ಹಿಂದಿನ ದಿನ ಮಳೆಯಾಗಿದ್ದ ಕಾರಣ ಆ ಪ್ರದೇಶವೆಲ್ಲ ಒದ್ದೆ ಒದ್ದೆಯಾಗಿ ಸುತ್ತಲಿನ ಗಿಡ, ಮರಗಳು ಹಸಿರಿನಿಂದ ಕಂಗೊಳಿಸುತ್ತಿದ್ದವು. ಕೆರೆಯ ಪ್ರಾರಂಭದ ಅಂಚಿನಲ್ಲೇ ಟುವ್ವಿ ಹಕ್ಕಿಯೊಂದು ಟುವ್ವಿ..ಟುವ್ವಿ.. ಎಂದು ಹಾಡುತ್ತಾ ಒಂದು ಬಳ್ಳಿಯ ಮೇಲೆ ಕುಳಿತು ಮುಗಿಲು ಮುಟ್ಟುವ ಹಾಗೆ ಹಾಡುತ್ತಿತ್ತು. ಅದನ್ನು ದೂರದಿಂದಲೇ ನೋಡಿದ ನಾನು ನನ್ನ ನಡಿಗೆಯನ್ನು ತಕ್ಷಣ ನಿಲ್ಲಿಸಿ, ಸ್ವಲ್ಪ ಸಮಯ ಅಲ್ಲೆ ನಿಂತು ಟುವ್ವಿ ಹಕ್ಕಿಯ ಹಾಡನ್ನು ಕೇಳುತ್ತಾ, ಅದನ್ನೇ ನೋಡುತ್ತಾ ಮಗ್ನನಾಗಿ ನಿಂತೆ. ಸ್ವಲ್ಪ ಸಮಯದ ನಂತರ ಹಾಗೆ ಮುಂದೆ ಸಾಗುತ್ತಾ ಹೋದಂತೆ ಅಲ್ಲೇ ಪಕ್ಕದ ಬೇಲಿಯಲ್ಲಿ ಕುಳಿತಿದ್ದ ಕೆಂಪು ಕಿಬ್ಬೊಟ್ಟೆಯ ಪಿಕಳಾರ ಒಂದು ಬಿಳಿ ಹಣ್ಣನ್ನು ತನ್ನ ಕೊಕ್ಕಿನಲ್ಲಿ ಕಚ್ಚಿಕೊಂಡು ಹಾರಿಹೋಯಿತು. ಅದು ಯಾವ ಹಣ್ಣು ಎಂದು ತಿಳಿಯಲು ನಾನು ಮುಳ್ಳುಗಳಿರುವ ಆ ಪೊದೆಯ ಬಳಿ ಸಾಗಿದೆ. ಅದು ಕುಂಡಲಿ ಗಿಡದಲ್ಲಿ ಬಿಟ್ಟ ಬಿಳಿ ಬಣ್ಣದ ಹಣ್ಣು ಎಂದು ತಿಳಿಯಲು ನನಗೆ ಹೆಚ್ಚು ಸಮಯಹಿಡಿಯಲಿಲ್ಲ. ಹಾಗೆ ಆ ಗಿಡವನ್ನೇ ಗಮನಿಸುತ್ತಿದ್ದ ನನಗೆ ಅದರ ಒಂದು ಎಲೆಯು, ತನ್ನ ವಿಭಿನ್ನ ಅರಿಶಿಣ ಬಣ್ಣದಿಂದ ನನ್ನ ಗಮನ ಸೆಳೆಯಿತು. ಸೂಕ್ಷ್ಮವಾಗಿ ಗಮನಿಸಿದ ನನಗೆ ಆಶ್ಚರ್ಯ ಕಾದಿತ್ತು. ಅದು ಎಲೆಯ ಬಣ್ಣವಾಗಿರಲಿಲ್ಲ; ಒಂದು ಬಗೆ ಚಿಟ್ಟೆಯ ಮೊಟ್ಟೆಗಳಾಗಿತ್ತು. ನನಗೆ ಕಂಬಳಿ ಹುಳು

ಚಿಟ್ಟೆಯಾಗುವ ಪರಿ ತಿಳಿಯಬೇಕೆಂದು ಬಹಳ ದಿನಗಳಿಂದ ಕುತೂಹಲವಿತ್ತು.ಇದಕ್ಕೆ ತೆರೆ ಎಳೆಯಲು ಇದೇ ಸದಾವಕಾಶವೆಂದು ನಿಶ್ಚಯಿಸಿ, ಪ್ರತಿನಿತ್ಯ ಆ ಮೊಟ್ಟೆಯನ್ನು ಗಮನಿಸಿ ಮೊಟ್ಟೆಯಿಂದ ಯಾವ ರೀತಿ ಚಿಟ್ಟೆ ಹೊರ ಬರಬಹುದು ಎಂದು ತಿಳಿಯಲು ಮುಂದಾದೆ.









ಅಂದಿನಿಂದ ಪ್ರತೀ ದಿನ ಮುಂಜಾನೆ ಅಲ್ಲಿಗೆ ಭೇಟಿ ನೀಡಿ ಆ ಮೊಟ್ಟೆಗಳನ್ನು ಗಮನಿಸುವುದು ನನ್ನ ದಿನಿನಿತ್ಯದ ಕಾರ್ಯಗಳಲ್ಲಿ ಒಂದಾಯಿತು. ಮೂರು, ನಾಲ್ಕು ದಿನಗಳ ನಂತರ ಆ ಮೊಟ್ಟೆಗಳು ಎಲೆಗಳ ಮೇಲೆ ಸಣ್ಣ ಸಣ್ಣ ಹುಳುಗಳಾಗಿ ಅಲ್ಲೇ ಇದ್ದ ಕುಂಡಲಿ ಎಲೆಗಳನ್ನು ಆಹಾರವನ್ನಾಗಿ ತಿನ್ನುತ್ತಾ ಹರಿದಾಡುತ್ತಿದ್ದದನ್ನು ನೋಡಿ ಕೆಲವೊಂದಷ್ಟು ಫೋಟೋ ತೆಗೆದುಕೊಂಡೆ. ಮೂರು ದಿನಗಳ ನಂತರ ಅಲ್ಲೇ ಕೆಲವು ಸಣ್ಣದಾಗಿ ಇದ್ದ ಕಂಬಳಿ ಹುಳುಗಳು ಸ್ವಲ್ಪ ದಪ್ಪವಾಗಿ ಗಿಡದ ಮೇಲೆಲ್ಲಾ ಹರಿಯುತ್ತಾ ಎಲೆಗಳನ್ನು ತಿನ್ನುತ್ತಿದ್ದವು. ಆದರೆ ಒಂದು ವಿಷಯ ಗಮನಕ್ಕೆ ಕಂಡುಬಂದದ್ದು ಏನೆಂದರೆ ನೂರಾರು ಚಿಟ್ಟೆಯ ಮೊಟ್ಟೆಗಳಲ್ಲಿ ಕೆಲವೇ ಕೆಲವು ಬೆರಳೆಣಿಕೆಯಷ್ಟು ಮಾತ್ರ ಕಂಬಳಿ ಹುಳುಗಳಾಗಿದ್ದವು. ನಂತರ ಅವು ಪ್ಯೂಪ ರೂಪವಾಗಿ ಅಲ್ಲೇ ಪಕ್ಕದ ಗಿಡಗಳಲ್ಲಿ ಬೆಳೆಯುತ್ತಾ ಹೋದವು. ಒಂದು ವಾರದ ಬಳಿಕ ಬೆಳಗಿನ ಸಮಯ 7.30 ರಿಂದ 9.30 ಸಮಯದ ನಡುವೆ ಈ ಚಿಟ್ಟೆಗಳು ಪ್ಯೂಪದಿಂದ ಹೊರಬರುವ ದೃಶ್ಯಗಳು ಅಲ್ಲಲ್ಲೇ ಕಾಣತೊಡಗಿದವು. ಆ ದೃಶ್ಯವನ್ನು ನೋಡಿ ಮೈಯೆಲ್ಲಾ ರೋಮಾಂಚನವಾಯಿತು. ಒಂದು ಸಣ್ಣ ಕಂಬಳಿ ಹುಳುವಿನಿಂದ ಚಿಟ್ಟೆ ಹೇಗೆ ಹೊರಬರುತ್ತದೆ ಎಂಬ ನನ್ನ ಕುತೂಹಲಕ್ಕೆ ಅಂದು ಉತ್ತರ ಸಿಕ್ಕಂತಾಯಿತು...








ಈ ಅಪರೂಪದ ದೃಶ್ಯವನ್ನು ಕಣ್ತುಂಬಿಸಿಕೊಳ್ಳುತ್ತಾ ಇವು ಹಾರಿ ಎತ್ತ ಕಡೆ ಹೋಗುತ್ತವೆ ಎಂದು ತಿಳಿಯಲು ಅಲ್ಲೇ ಕುಳಿತೆ. ಆದರೆ ನನ್ನ ಎಣಿಕೆಯಂತೆ ಅವು ಪ್ಯೂಪದಿಂದ ಹೊರ ಬಂದ ತಕ್ಷಣ ಹಾರದೆ ಸುಮ್ಮನೆ ಕುಳಿತವು. ಈ ನಡವಳಿಕೆಯನ್ನು ತಿಳಿಯದೆ ನಾನು ಚಿಟ್ಟೆಯ ಹತ್ತಿರಕ್ಕೆ ಹೋಗಿ ನೋಡಿದಾಗ ತಿಳಿದದ್ದು, ಈ ಚಿಟ್ಟೆಗಳ ರೆಕ್ಕೆಗಳು ಒದ್ದೆಯಾಗಿವೆ ಅದಕ್ಕಾಗಿ ಅವು ಹಾರಲು ಸಾಧ್ಯವಾಗುತ್ತಿಲ್ಲ ಎಂದು. ಆದ ಕಾರಣ ಇವು ಸೂರ್ಯನ ಬಿಸಿಲಿನಲ್ಲಿ ಸ್ವಲ್ಪ ಸಮಯ ರೆಕ್ಕೆಗಳನ್ನು ಒಣಗಿಸುತ್ತಾ ಕುಳಿತಿದ್ದವು. ನಂತರ ರೆಕ್ಕೆಗಳನ್ನು ಬಿಚ್ಚಿ ಬಡಿಯುತ್ತ ಬೇರೊಂದೆಡೆಗೆ ಹಾರಿಹೋದವು...

**ಚಿತ್ರ- ಲೇಖನ: ರಘುಕುಮಾರ್ ಸಿ.**

**ರಾಮನಗರ ಜಿಲ್ಲೆ**



# ಮುಳ್ಳು ಮಳ್ಳಿ ಬ್ರಹ್ಮದಂಡೆ ಸಸ್ಯ

ನೆಲದಲ್ಲಿ ಹರಡಿ ಬಳುಕುವ ಈ ಶ್ವೇತ ಸುಂದರಿಯನ್ನು ಮುಟ್ಟಲು ಹೋದರೆ ಬೆರಳಿಗೆಲ್ಲ ಮುಳ್ಳುಗಳು ಮುತ್ತಿಡುತ್ತವೆ. ಮೈಮೇಲೆಲ್ಲ ಮುಳ್ಳಿನಿಂದ ತುಂಬಿದ ಮಳ್ಳಿ ಸಸ್ಯವೇ ಬ್ರಹ್ಮದಂಡೆ. ಬ್ರಹ್ಮದಂಡೆಯನ್ನು ಬ್ರಹ್ಮದಂಡಿ, ಉತ್ಕಂಠ, ನರಿಮುಳ್ಳು ಎಂತಲೂ... ಸಸ್ಯಶಾಸ್ತ್ರೀಯವಾಗಿ ಎಕಿನಾಪ್ಸ್ ಎಕಿನೇಟಸ್ (Echinops echinatus) ಎಂದು ಕರೆದು ಅಸ್ಟರೇಸಿ (Asteraceae) ಸಸ್ಯ ಕುಟುಂಬಕ್ಕೆ ಸೇರಿಸಲಾಗಿದೆ.





ಈ ಮೂಲಿಕೆ ಸಸ್ಯವು ಭಾರತ ಮೂಲದ್ದಾಗಿದೆ. ಇದು ಭಾರತ, ಶ್ರೀಲಂಕಾ ಮತ್ತು ಪಾಕಿಸ್ತಾನ ದೇಶಗಳಲ್ಲಿ ಕಂಡುಬರುತ್ತದೆ. ಪಾಳುಬಿದ್ದ ಭೂಮಿ, ಗುಡ್ಡಗಾಡು ಪ್ರದೇಶ, ಹೊಲಗಳ ಬದುಗಳಲ್ಲಿ ಬೆಳೆಯುವ ಸಸ್ಯವಾಗಿದೆ. ಇದು ಚಿಕ್ಕದಾದ, ಸದೃಢವಾದ ಕಾಂಡಗಳನ್ನು ಹೊಂದಿದೆ. ಬುಡದಿಂದ ಕವಲೊಡೆದು ಹುಲುಸಾಗಿ ಬೆಳೆಯುವುದರಿಂದ ಸಣ್ಣ ಪೊದೆಯಂತೆ ಕಾಣುತ್ತದೆ. ಇದು 1 ರಿಂದ 1.5 ಅಡಿ ಎತ್ತರದವರೆಗೆ ಬೆಳೆಯಬಲ್ಲದು. ಪರ್ಯಾಯವಾಗಿ ಜೋಡಿಸಲ್ಪಟ್ಟ ಉದ್ದವಾದ ಎಲೆಗಳ ಅಂಚು ಸೀಳಾಗಿದೆ. ಈ ಸೀಳುಗಳ ತುದಿಯು ಮುಳ್ಳಿನಂತೆ ಮೊನಚಾಗಿದೆ. ಕಡು ಹಸಿರು ಬಣ್ಣದ ಎಲೆಗಳು 7 ರಿಂದ 12 ಸೆಂ.ಮೀ. ಉದ್ದವಾಗಿರುತ್ತವೆ. ಸಸ್ಯದ ಮೇಲೆಲ್ಲಾ ಬಿಳಿ ವರ್ಣದ ಸೂಕ್ಷ್ಮವಾದ ಕೂದಲುಗಳಿವೆ. ಎಲೆಗಳ ಕಂಕುಳು ಹಾಗೂ ಕಾಂಡದ ತುದಿಯಿಂದ ಮುಳ್ಳುಗಳಿಂದಾವೃತವಾದ 3 ರಿಂದ 5 ಸೆಂ.ಮೀ ಗಾತ್ರದಲ್ಲಿನ ಗೋಳಾಕಾರದ ಚಂಡು ಹೂಗುಚ್ಛ ಬೆಳೆಯುತ್ತವೆ. ಈ ಹೂ ಚಂಡಿನಲ್ಲಿ ಬಿಳುಪಾದ 5 ಮೀ.ಮೀ ನಷ್ಟು ಸಣ್ಣ ಗಾತ್ರದ ಪುಷ್ಪದಳದ ಹೂವುಗಳು ಅರಳುತ್ತವೆ. ಡಿಸೆಂಬರ್-ಜನವರಿ ಮಾಹೆಯು ಹೂಬಿಡುವ ಸಮಯವಾಗಿದೆ.





ಈ ಗಿಡಮೂಲಿಕೆಯು ಪೂಜ್ಯನೀಯ ಸ್ಥಾನವನ್ನು ಹೊಂದಿದ್ದು, ಉತ್ತರ ಕರ್ನಾಟಕದಲ್ಲಿ ಈ ಸಸ್ಯವನ್ನು ದೀಪಾವಳಿ, ಬಲಿ ಪಾಡ್ಯಮಿ ಪೂಜೆಯಲ್ಲಿ ಜನರು ಅದಕ್ಕೆ ವಿಶೇಷ ಸ್ಥಾನ ನೀಡಿ  ಜೋಳದ ದಂಟು, ಕೊಲಾಣೆಸೊಪ್ಪು, ಕವಚಿ ಕಡ್ಡಿ, ಉತ್ರಾಣಿ ಕಡ್ಡಿ, ಬೆಂಡು ಹೂ, ತೊಗ್ರಿ ಗಿಡದ ಜೊತೆಯಲ್ಲಿ ಬ್ರಹ್ಮದಂಡೆಯನ್ನು ಸೇರಿಸಿ ಕಟ್ಟಿದ ಐದು ಕಟ್ಟಿನ ಹುಲಸಿನ ಹಂದರ ನಿರ್ಮಿಸಿ “ಹಟ್ಟಿ ಲಕ್ಕವ್ವ”ಳನ್ನು ಸೆಗಣಿಯಿಂದ ಮಾಡಿದ ಗುರ್ಜವ್ವಳನ್ನು ಮಧ್ಯದಲ್ಲಿರಿಸಿ ಪೂಜಿಸಿ ಅಪ್ಪಟ ಗ್ರಾಮೀಣ ಸಂಪ್ರದಾಯಗಳೊಂದಿಗೆ ಆಚರಿಸಲಾಗುತ್ತದೆ.

ಸಸ್ಯದ ವಿವಿಧ ಭಾಗಗಳಾದ ಬೇರುಗಳು, ಎಲೆಗಳು, ತೊಗಟೆ, ಹೂಗಳನ್ನು ನಾಟೀ ಹಾಗೂ ಆಯುರ್ವೇದದ ವೈದ್ಯ ಪದ್ಧತಿಯಲ್ಲಿ ವ್ಯಾಪಕವಾಗಿ ಬಳಸಲಾಗುತ್ತದೆ. ಚರ್ಮವ್ಯಾಧಿಗೆ, ತುರಿಕೆ, ಗಾಯವಾಸಿಗೆ, ರೋಗ ನಿರೋಧಕ ಶಕ್ತಿ, ಜೀರ್ಣ ಶಕ್ತಿ ಹೆಚ್ಚಿಸಲು, ವೀರ್ಯ ವರ್ಧನೆ, ಲೈಂಗಿಕ ರೋಗ ನಿವಾರಣೆ, ಜ್ವರ ನಿವಾರಕಗಳಲ್ಲಿ ಈ ಸಸ್ಯವನ್ನು ಬಳಸಲಾಗುತ್ತದೆ.  ಈ ಸಸ್ಯವು ಕಲಾ (Painted Lady Butterfly-Vanessa cardui) ಚಿಟ್ಟೆಯ ಕಂಬಳಿಹುಳುವಿನ ಆತಿಥ್ಯೇಯ ಸಸ್ಯವಾಗಿದೆ.




ವಿವಿ ಅಂಕಣ

# ಬಲಿಯಾದ ಆಹಾರ ರಹಸ್ಯ!

ನಗರದಲ್ಲಿ ಸರಣಿ ಕಳ್ಳತನಗಳು ನಡೆಯುತ್ತವೆ. ಅವು ಎಷ್ಟು ಜಾಗರೂಕತೆ ಮತ್ತು ಜಾಣತನದಿಂದ ನಡೆದಿರುತ್ತವೆಂದರೆ, ಪೋಲೀಸರಿಗೆ ಯಾವ ಸಣ್ಣ ಸುಳಿವೂ ಸಿಗುವುದಿಲ್ಲ. ಹಾಗಾಗಿ ಕಳ್ಳತನಗಳನ್ನು ಭೇದಿಸಲು ಒಬ್ಬ ವಿಶೇಷ ಪೋಲೀಸ್ ಅಧಿಕಾರಿಯನ್ನು ನೇಮಿಸುತ್ತಾರೆ. ಸಮಯ ಕಳೆಯುತ್ತದೆಯೇ ವಿನಹ ಆ ವ್ಯಕ್ತಿಗೂ ಈ ಚಕ್ರವ್ಯೂಹವನ್ನು ಭೇದಿಸಲು ಆಗುವುದಿಲ್ಲ. ಆದರೆ ಅವನ ಸಹಾಯಕನಾಗಿ ಕೆಲಸ ಮಾಡುತ್ತಿದ್ದ ಸಹೋದ್ಯೋಗಿ ಪೋಲೀಸ್ ಮಾತ್ರ ತನ್ನ ಎಲ್ಲಾ ಜಾಣ್ಮೆಯನ್ನು ಬಳಸಿ ಕಳ್ಳನ ರಹಸ್ಯ ಬೇಧಿಸಲು ಸಣ್ಣ ಸಣ್ಣ ಸುಳಿವುಗಳನ್ನು ಸಂಗ್ರಹಿಸಿ, ಹೆಣೆದು ಇನ್ನೇನು ತೀರ್ಮಾನಕ್ಕೆ ಬರುವ ಸಮಯ. ಆದರೆ ಅವನ ಮೇಲಾಧಿಕಾರಿ ಅವನನ್ನು ತಡೆದುಬಿಡುತ್ತಾನೆ. ಅಲ್ಲಿಗೆ ವಿರಾಮ. ವಿರಾಮದ ನಂತರದ ಭಾಗದಲ್ಲಿ ಅದೇ ಸಹಾಯಕ ಪೋಲೀಸ್ ತನ್ನ ಕರ್ತವ್ಯ ಬಿಡದೇ ಮುಂದುವರೆಸುತ್ತಾನೆ. ಕೊನೆಗೆ ಅವನಿಗೇ ನಂಬಲಾಗದ ರಹಸ್ಯ ಬಯಲಾಗುತ್ತದೆ. ಅದೇನೆಂದರೆ ಇಷ್ಟು ದಿನ ಜೊತೆಗಿದ್ದು ಯಾರ ಆದೇಶಗಳನ್ನು ಪಾಲಿಸುತ್ತಿದ್ದನೋ ಅದೇ ವಿಶೇಷ ಅಧಿಕಾರಿಯೇ ಕಳ್ಳ. ಅದು ಹೇಗೆ ಎಂದು ಒಂದೊಂದೇ ಸೀನ್ ನಲ್ಲಿ ತೋರಿಸಿ ವೀಕ್ಷಕರ ಹುಬ್ಬೇರಿಸುವಂತೆ ಮಾಡಿರುತ್ತಾನೆ ಚಲನಚಿತ್ರ ನಿರ್ದೇಶಕ. ಇಂತಹ ಹಲವಾರು ಟ್ವಿಸ್ಟ್ ಇರುವ ಸಿನೆಮಾಗಳು ನೀವೂ ನೋಡಿರಬಹುದು. ಇಂತಹ ಟ್ವಿಸ್ಟ್‌ಗಳು ನಮ್ಮ ನಿಜಜೀವನದಲ್ಲಿ ನೋಡಿದರೆ ಅದು ಇನ್ನೂ ಸ್ವಾರಸ್ಯಕರ ಎನಿಸುತ್ತದೆ ಅಲ್ಲವೇ? ಅದೇ ವಿಷಯ ಸಸ್ಯಗಳ ಜೀವನದಲ್ಲಿ ನಡೆದರೆ ಇನ್ನೂ ಹೆಚ್ಚು ಅಚ್ಚರಿಯಾಗುತ್ತದೆ. ಅಂತಹುದೇ ಒಂದು ವಿಷಯವಿಲ್ಲಿದೆ.

ಇದೊಂದು ಸಾಮಾನ್ಯವಾದ ಕಾಡು ಸಸ್ಯ. ಆದರೆ ಇದರ ನಿಜವಾದ ಜೀವನ ಶೈಲಿ ಕೇಳಿದರೆ ಎಂಥವರಿಗೂ ಅಚ್ಚರಿಯಾಗುತ್ತದೆ. ಅಂತಹ ಒಂದು ವಿಸ್ಮಯ ವಿಷಯ ಹೊರ ಬಂದದ್ದು ಆ ಸಸ್ಯವಿರುವ ದೇಶದ ಸಸ್ಯತಜ್ಞರಿಗೆ ಹುಬ್ಬೇರಿಸುವಂತೆ ಮಾಡಿದೆ. 19ನೇ ಶತಮಾನದಿಂದಲೂ ಸಸ್ಯತಜ್ಞರು ಪ್ರಯೋಗಗಳಿಗೆ ಬಳಸುತ್ತಿದ್ದ ಟ್ರಿಯಾಂಟಾ ಆಕ್ಸಿಡೆಂಟಲಿಸ್ (Triantha occidentalis) ಎಂಬ ವೈಜ್ಞಾನಿಕ ಹೆಸರಿರುವ ಒಂದು ಕಾಡು ಹೂ ಸಸ್ಯವಿದು. ಇಲ್ಲಿಯವರೆಗೆ ಎಲ್ಲದರಂತೆ ಸಾಮಾನ್ಯ ಹೂ ಬಿಡುವ ಸಸ್ಯ ಎಂದು ತಿಳಿದಿದ್ದ




ಇದು ಈಗ ಕೀಟಾಹಾರಿ ಎಂದು ಬಯಲಾಗಿದೆ. ಹೌದು ತನ್ನ ಹೂ ಬಿಡುವ ಕಾಂಡದ ಅಂಟು ರಸಸದಲ್ಲಿ ಇದ್ದ ಸಣ್ಣ ಸಣ್ಣ ಸತ್ತ ಕೀಟಗಳು ಸಸ್ಯದ ಕೀಟಾಹಾರದ ನಿಗೂಢತೆಯನ್ನು ಬಯಲು ಮಾಡಿದೆ. ಅರೇ ಈ ತರಹದ ಅಂಟು ರಸ ಅಥವಾ ದ್ರವ ಕೇವಲ ಕೀಟಗಳನ್ನು ಹಿಡಿದು ತಿನ್ನಲು ಮಾತ್ರವೇ ಇದ್ದೀತೇ? ಬೇರೆ ಕಾರಣವೂ ಇರಬಹುದಲ್ಲವೇ? ಎಂದು ನೀವೆನ್ನಬಹುದು. ಈ ನಿಮ್ಮ ತರ್ಕ ಒಪ್ಪುವಂತದ್ದು. ಮೊದ ಮೊದಲು ಈ ಅಂಟಿಗೆ ಅಂಟಿಕೊಂಡು ಅಸುನೀಗಿದ್ದ ಸಣ್ಣ ಕೀಟಗಳನ್ನು ಕಂಡ ಸಸ್ಯತಜ್ಞರೂ ಸಹ ಹಾಗೇ ತಿಳಿದಿದ್ದರು. ಇದು ಬಹುಶಃ ಆ ಸಸ್ಯಕ್ಕೆ ತೊಂದರೆಯನ್ನು ಉಂಟುಮಾಡುವ ಕೀಟಗಳನ್ನು ಕೊಲ್ಲಲು ಮಾಡಿಕೊಂಡ ತಂತ್ರವೆಂದೇ ತಿಳಿದಿದ್ದರು. ಇಂತಹ ತಂತ್ರ ಉಪಯೋಗಿಸುವ ಇನ್ನೂ ಹಲವು ಸಸ್ಯಗಳಿರುವುದರಿಂದ ಈ ಕಾಡು ಹೂ ಸಸ್ಯದ ಮೇಲೆ ಯಾರಿಗೂ ಒಂದು ಶತಮಾನದ ವರೆಗೂ ಸಂದೇಹ ಬಂದಿರಲಿಲ್ಲ. ಆದರೆ ಸತ್ಯವನ್ನು ಎಷ್ಟು ದಿನವೆಂದು ಮುಚ್ಚಿಡಲಾದೀತು? ಒಂದಲ್ಲಾ ಒಂದು ದಿನ ಹೊರ ಬಂದೇ ಬರುತ್ತದೆ. ಸಸ್ಯವನ್ನು ಕೊಂಚ ವಿಶೇಷವಾಗಿ ಗಮನಿಸಿದ ಮೇಲೆ ತಿಳಿದದ್ದು ಇದು,

ನಮ್ಮ ಈ ಕಾಡು ಹೂ ಸಸ್ಯವೂ ಸಹ ಬೇರೆ ಕೀಟಾಹಾರಿಯಂತೆ ಪ್ರಕಾಶಮಾನವಾದ ಪ್ರದೇಶ ಅಥವಾ ಹೆಚ್ಚು ಪೋಷಕಾಂಶಗಳಿರದ ಪ್ರದೇಶಗಳಲ್ಲಿ ಬೆಳೆಯುತ್ತಿದ್ದವು. ಆದರೆ ಈ ವಿಷಯಗಳೇ ಸಸ್ಯತಜ್ಞರಿಗೆ ಸಂದೇಹವನ್ನುಂಟು ಮಾಡಿದ್ದು. ಇದು ಎಲ್ಲದರಂತೆ ಸಾಮಾನ್ಯ ಹೂಸಸ್ಯವಾಗಿದ್ದರೆ ಎಲ್ಲಾ ಪೋಷಕಾಂಶ ಸಿಗುವ ಸ್ಥಳದಲ್ಲಿ ಬೆಳೆಯಬಹುದು. ಇಂತಹ ಪೋಷಕಾಂಶ ಕಡಿಮೆ ಇರುವ ಜಾಗದಲ್ಲಿ ಬೆಳೆದ ಇವಕ್ಕೆ ಉಳಿದ ಪೋಷಕಾಂಶದ ಸರಬರಾಜು ಹೇಗೆ? ಭಾಗಶಃ ಇದು ಕೀಟಾಹಾರಿಯೇ? ಎಂಬ ಸಂದೇಹಗಳು ಹುಟ್ಟಿದವು. ಸುಮ್ಮನೆ ಗೊಂದಲವೇಕೆ, ಇದು ಕೀಟಾಹಾರಿಯೋ ಇಲ್ಲವೋ ಎಂದು ಪರೀಕ್ಷಿಸಿದರೆ ಸಂದೇಹ ಬಗೆಹರಿದಂತೆ ಎಂದು ತೀರ್ಮಾನಿಸಿದರು. ಈ ವಿಷಯ ತಿಳಿಯಲು ನಮ್ಮ ಸಸ್ಯ ತಜ್ಞರಿಗೆ ಒಂದು ವಿಷಯ ಖಚಿತವಾಗಬೇಕು. ಅದೇನೆಂದರೆ ಈ ಸಸ್ಯದ ಅಂಟಿನಲ್ಲಿ ಸಿಕ್ಕು ಸತ್ತ ಕೀಟಗಳಿಂದ ಈ ಸಸ್ಯ ಪೋಷಕಾಂಶಗಳನ್ನು ಹೀರಿಕೊಳ್ಳುತ್ತಿದೆಯೇ ಇಲ್ಲವೇ? ಎಂದು ಪರೀಕ್ಷಿಸಬೇಕಿತ್ತು. ಆ ಪರೀಕ್ಷೆಯ ವಿಧಾನ ಇಂತಿದೆ...

ಹಣ್ಣಿನ ನೊಣ (fruit fly) ಕ್ಕೆ ಸಾರಜನಕ-15 ಅನ್ನು ತಿನ್ನಿಸಿ ತಯಾರು ಮಾಡಿದರು. ಈ ವಿಶಿಷ್ಟ ಸಾರಜನಕವು ಎಲ್ಲೆಲ್ಲಿಗೆ ಹರಡಿದೆ ಎಂದು ಗುರುತಿಸಬಹುದಿತ್ತು. ಹೀಗೆ ಸಾರಜನಕ-15 ತಿನ್ನಿಸಿದ ನೊಣಗಳನ್ನು ನಮ್ಮ ಈ ಕಾಡು ಹೂವಿನ ಸಸ್ಯಗಳಿರುವ ಜಾಗದಲ್ಲಿ ಬಿಡಲಾಯಿತು. ಇದಾದ ಬಳಿಕ ಅದೇ ಸಸ್ಯಗಳಲ್ಲಿ ಇದ್ದ ಸಾರಜನಕವನ್ನು ಪರೀಕ್ಷಿಸಿದರು. ಆ ಪ್ರದೇಶದಲ್ಲಿ ಪರೀಕ್ಷಿಸಿದ ಸಸ್ಯಗಳ ಪೈಕಿ 50%ಕ್ಕಿಂತ ಹೆಚ್ಚು ಸಸ್ಯಗಳಲ್ಲಿನ ಸಾರಜನಕ ಈ ಹಣ್ಣಿನ ನೊಣಗಳಿಂದಲೇ ಬಂದಿದ್ದವು ಎಂಬ ಸಂಗತಿ ಅರಿತರು. ಅದರ ಅರ್ಥ ನಮ್ಮ ಕಾಡು ಹೂ ಸಸ್ಯಗಳು ಕೀಟಾಹಾರಿಗಳೇ ಎಂದು ರುಜುವಾತಾಯಿತು. ಇದರ ಜೊತೆಗೇ ಪರೀಕ್ಷಿಸಿದಾಗ ಅವುಗಳ ಅಂಟು ರಸದಲ್ಲಿ 'ಫಾಸ್ಪೇಟೇಸ್ (phosphatase)' ಕೂಡಾ ಇತ್ತು. ಈ ಫಾಸ್ಪೇಟೇಸ್ ಕೇವಲ ಕೀಟಾಹಾರಿ ಸಸ್ಯಗಳಲ್ಲಿ ಮಾತ್ರ ಸ್ರವಿಸಲ್ಪಡುತ್ತದೆ. ಆದ್ದರಿಂದ ಈಗ ನಮ್ಮ 'ಕಾಡು ಹೂ ಸಸ್ಯ'ವನ್ನು 'ಕೀಟಾಹಾರಿ ಕಾಡು ಹೂ ಸಸ್ಯ'ವೆಂದು ನಿಸ್ಸಂದೇಹವಾಗಿ ಹೇಳಬಹುದು.

ಆದರೆ ಪ್ರಪಂಚದಲ್ಲಿ ಇಲ್ಲಿಯವರೆಗೆ ಗುರುತಿಸಿರುವ ಸುಮಾರು 800ಬಗೆಯ ಕೀಟಾಹಾರಿ ಸಸ್ಯಗಳಿಗೂ ನಮ್ಮ ಈ ಕಾಡು ಹೂ ಕೀಟಾಹಾರಿಗೂ ಸಣ್ಣ ವ್ಯತ್ಯಾಸವಿದೆ. ಸಾಮಾನ್ಯ ಕೀಟಾಹಾರಿ ಸಸ್ಯಗಳು ತಮ್ಮ ಕೀಟಾಹಾರವನ್ನು ಆಕರ್ಷಿಸುವ ದ್ರವ ಅಥವಾ ಅಂಟನ್ನು ತಾನು ಬಿಡುವ ಹೂವಿನಿಂದ ದೂರದಲ್ಲಿ ಇಟ್ಟಿರುತ್ತದೆ. ಏಕೆಂದರೆ ತಮ್ಮ ಹೂವಿನ ಪರಾಗಸ್ಪರ್ಶ ಮಾಡಲು ಬರುವ ಕೀಟಗಳೂ ಸಹ ಅವುಗಳಿಗೆ ಆಹಾರವಾಗಬಹುದು. ಆದ್ದರಿಂದಲೇ ಈ ಅಂತರ ಕಾಯ್ದುಕೊಳ್ಳುತ್ತವೆ. ಆದರೆ ನಮ್ಮ ಈ ಕಾಡು ಹೂ ಗಿಡದಲ್ಲಿ ಮಾತ್ರ ಕೀಟಗಳನ್ನು ಸಿಕ್ಕಿಸುವ ಮತ್ತು ಸೇವಿಸುವ ಆ ಅಂಟನ್ನು ತನ್ನ ಹೂವಿನ ಬಳಿಯೇ ಇಟ್ಟಿದೆ. ಈ ಕಾರಣದಿಂದಾಗಿ ಈ ಗಿಡ ಸ್ರವಿಸುವ ಅಂಟು ಕೇವಲ ಸಣ್ಣ ಕೀಟಗಳನ್ನು ಮಾತ್ರ ಹಿಡಿಯಬೇಕು. ದುಂಬಿ, ಚಿಟ್ಟೆಗಳಂತಹ ತನ್ನ ಪರಾಗಸ್ಪರ್ಶಕಗಳನ್ನು ಹಿಡಿಯುವಂತಿರಬಾರದು. ಅದಕ್ಕೆಂದೇ ತಾನು ಸ್ರವಿಸುವ ಅಂಟು ದ್ರವ ದೊಡ್ಡ ದೊಡ್ಡ ಕೀಟಗಳನ್ನು ಹಿಡಿಯುವಷ್ಟು ಶಕ್ತಿಯುತವಾಗಿರುವುದಿಲ್ಲ. ಜೊತೆಗೆ ಈ ಕೆಳಗೆ ತೋರಿರುವ ಚಿತ್ರವನ್ನು ಗಮನಿಸಿದಲ್ಲಿ, ಈ ಸಣ್ಣ ಸಣ್ಣ ಕೂದಲಿನೆಳೆಯಂತಿರುವ ಆಕಾರ ಮತ್ತು ಅಂಟು ಕೀಟಾಹಾರಿ ಸಸ್ಯಗಳು ಜೀವವಿಕಾಸದಲ್ಲಿ ಹೇಗೆ ಬದಲಾಗುತ್ತಾ ಬಂದಿವೆ ಎಂಬ ಸುಳಿವನ್ನೂ ಸಹ ಕೊಡುತ್ತದೆ. ಹಾಗಾಗಿ ಈ ಕೀಟಾಹಾರಿಗೆ 'ಅರೆ ಕೀಟಾಹಾರಿ' ಎಂದರೆ ತಪ್ಪಾಗಲಾರದು.




ಅದೇನೇ ಆದರೂ ಈ ಆಹಾರದಾಟದಲ್ಲಿ ಪಳಗಿದ ಜೀವಿ ಮಾತ್ರ ತನ್ನ ಪೀಳಿಗೆಯನ್ನು ಮುನ್ನಡೆಸಲಾದೀತು ಇಲ್ಲವಾದರೆ ಪಳೆಯುಳಿಕೆಯಲ್ಲೂ ನೋಡಲು ಸಿಗಬಹುದೆಂಬ ಯಾವುದೇ ಖಾತರಿಗಳಿಲ್ಲ.

**ಮೂಲ ಲೇಖನ:** ScienceNewsforStudents

**ಲೇಖನ: ಜೈಕುಮಾರ್ ಆರ್.**
**ಡಬ್ಲ್ಯೂ. ಸಿ. ಜಿ. ಬೆಂಗಳೂರು ಜಿಲ್ಲೆ**

# ಚೂಟಿ ಜಂಪು ಜೇಡ

ಚೂಟಿ ಹಾರು ಜೇಡವೇ,
ಜಿಗಿದು ಎಲ್ಲಿ ಹೊರಟಿಹೆ?
ಅತ್ತ ಇತ್ತ ಇಣುಕುತ,
ಮೇಲೆ ಕೆಳಗೆ ನೆಗೆಯುತ,
ಹಿಂದೆ ಮುಂದೆ ಅಲೆದು
ಏನು ಹೊಂಚು ಹಾಕಿಹೆ!?
ಚುರುಕು ಹಾರುಜೇಡವೇ

ಅದೇನು ಮಾಟ ನಿನ್ನ ನೋಟ,
ದೃಷ್ಟಿಯಲ್ಲಿ ಜಗಕೇ ಮುಕುಟ,
ಅಷ್ಟದಿಕ್ಕೂ ಗೆದ್ದ ನೀನು
ಬೆರಗುಗಣ್ಣಲೇನು ನೋಡುವೆ!?
ಜಾಣ ಅಷ್ಟ ನೇತ್ರನೇ
ಹೂವ ಮುತ್ತಿ ಮಧುವ ಹೀರಿ,
ತುಡುಗು ಕೀಟವೆಲ್ಲ ಹಿಡಿದು,
ಸೊಕ್ಕಿನಲ್ಲಿ ಮೆರೆವ ಜೇಡವನ್ನ
ಹಿಡಿದು ಬುದ್ಧಿ ಕಲಿಸುವೆ!
ನಿಸರ್ಗ ಮಿತ್ರ ಶೂರನೇ

ಚೂಟಿ ಹಾರು ಜೇಡವೇ,
ಜಿಗಿದು ಎಲ್ಲಿ ಹೊರಟಿಹೆ!?

- ಸಚಿನ್ ಬಿ. ಎಸ್.
ಶಿವಮೊಗ್ಗ ಜಿಲ್ಲೆ

# ಪ್ರಕೃತಿ ಬಿಂಬ



**ಬೆಳ್ಗಣ್ಣ** © **ಕಾಂತರಾಜು ಡಿ.**

ಭಾರತ, ಇಂಡೋನೇಷ್ಯಾ, ಮಲೇಷ್ಯಾದ ಕಾಡುಗಳಲ್ಲಿ ಕಂಡುಬರುವ ಬೆಳ್ಗಣ್ಣ ಪಕ್ಷಿಯು ಗುಬ್ಬಚ್ಚಿ ಗಾತ್ರದ ಪಕ್ಷಿಯಾಗಿದ್ದು, ಕಣ್ಣಿನ ಸುತ್ತಲು ಬಿಳಿ ಅಂಚು ಹೊಂದಿರುವ ಹಕ್ಕಿಗಳ ಕುಟುಂಬಕ್ಕೆ ಸೇರಿದೆ. ಇವುಗಳ ಮೈ ಮೇಲ್ಭಾಗ, ಕೊರಳು ಹಾಗೂ ಬಾಲವು ಹಳದಿ ಅಥವಾ ಹಸಿರು ಮಿಶ್ರಿತ ಹಳದಿ ಬಣ್ಣದ್ದಾಗಿದ್ದು, ಕಣ್ಣಿನ ಸುತ್ತಲೂ ಬಿಳಿ ಉಂಗುರವಿರುತ್ತದೆ. ಹೆಣ್ಣು ಹಾಗೂ ಗಂಡು ಪಕ್ಷಿಗಳ ಬಣ್ಣದಲ್ಲಿ ಯಾವುದೇ ವ್ಯತ್ಯಾಸ ಕಂಡುಬರುವುದಿಲ್ಲ. ಹೂಗಳಲ್ಲಿನ ಕೀಟ ಹಾಗೂ ಮಕರಂದವನ್ನು ಆಹಾರವಾಗಿ ಸೇವಿಸುವ ಈ ಪಕ್ಷಿ ಸದಾ ಹಿಂಡುಗಳಲ್ಲಿ ಕಾಣಿಸಿಕೊಳ್ಳುತ್ತದೆ. ಆದರೆ ಸಂತಾನೋತ್ಪತ್ತಿಯ ಸಮಯದಲ್ಲಿ ಮಾತ್ರ ತಾತ್ಕಾಲಿಕವಾಗಿ ಬೇರೆಯಾಗುತ್ತವೆ. ಬೆಳ್ಗಣ್ಣಗಳು ಇತರೆ ಪಕ್ಷಿಗಳ ಗೂಡು ಕಟ್ಟುವ ಸಾಮಗ್ರಿಗಳನ್ನು ಕದಿಯುತ್ತವೆ ಎಂದು ಹೇಳಲಾಗುತ್ತದೆ. ಇವುಗಳ ಒಂದು ವಿಶೇಷತೆಯೆಂದರೆ, ಇವು ಬೇರೆ ಪಕ್ಷಿಗಳ ಮರಿಗಳಿಗೂ, ಅಂದರೆ ಸಾಮಾನ್ಯವಾಗಿ ಬಾಲದಂಡೆ ಹಕ್ಕಿಗಳ ಮರಿಗಳಿಗೂ ಆಹಾರ ಉಣಿಸುವುದನ್ನು ಕಾಣಬಹುದು. ಸಾಧಾರಣವಾಗಿ 2 ತಿಳಿ ನೀಲಿ ಬಣ್ಣದ ಮೊಟ್ಟೆಗಳನ್ನಿಡುವ ಇವು ಸುಮಾರು 10 ದಿನಗಳು ಕಾವು ಕೊಟ್ಟು ಮರಿ ಮಾಡುತ್ತವೆ. ತಂದೆ ಮತ್ತು ತಾಯಿ ಹಕ್ಕಿಗಳೆರಡೂ ಸಂತಾನ ಪಾಲನೆಯಲ್ಲಿ ಸಮನಾಗಿ ಶ್ರಮಿಸುತ್ತವೆ.



**ಬೇಲಿ ಚಟಕ** **© ಕಾಂತರಾಜು ಡಿ.**

ಬೇಲಿ ಚಟಕ ಪಕ್ಷಿಯು ಭಾರತದಾದ್ಯಂತ ಕಂಡುಬರುವ ಗುಬ್ಬಚ್ಚಿ ಗಾತ್ರದ ಪಕ್ಷಿಯಾಗಿದೆ. ಗಂಡು ಪಕ್ಷಿಯ ಪೃಷ್ಠ, ತಳ ಹೊಟ್ಟೆ ಮತ್ತು ರೆಕ್ಕೆಗಳಲ್ಲಿ ಬಿಳುಪು ತೇಪೆಗಳಿರುವ ಕಡು ಕಪ್ಪು ಬಣ್ಣವನ್ನು ಹೊಂದಿದೆ. ಹೆಣ್ಣು ಪಕ್ಷಿಯು ತಿಳಿ ತುಕ್ಕು ವರ್ಣದ ಪೃಷ್ಠವಿದ್ದು ಸಾಧಾರಣ ಕಂದು ಬಣ್ಣದ್ದಾಗಿದೆ. ಇವುಗಳಲ್ಲಿ ಕೆಲವು ಸ್ಥಳೀಯವಾದರೆ, ಇನ್ನೂ ಕೆಲವು ವಲಸೆ ಪಕ್ಷಿಗಳಾಗಿವೆ. ಸಣ್ಣ ಹುಳುಗಳನ್ನು ಹಿಡಿದು ತಿನ್ನಲು ಆಗಾಗ ನೆಲದ ಮೇಲಿಳಿಯುತ್ತವೆ. ಚಿಕ್-ಚಿಕ್ ಶಬ್ದದಿಂದ ಪ್ರಾರಂಭಿಸಿ ಶಿಳ್ಳೆನಂತಹ ಧ್ವನಿಯನ್ನು ಹೊರಹೊಮ್ಮಿಸುತ್ತವೆ. ಈ ಹಾಡನ್ನು ಪ್ರಣಯಾಚರಣೆಯಲ್ಲಿ ಹಾಗೂ ಪ್ರತಿಸ್ಪರ್ಧಿಗಳನ್ನು ಎದುರಿಸಲು ಪ್ರತಿಭಟನಾ ಸೂಚಕವಾಗಿ ಹಾಡುತ್ತವೆ. ಇವುಗಳ ಸಂತಾನೋತ್ಪತ್ತಿಯ ಕಾಲ ಫೆಬ್ರುವರಿಯಿಂದ ಆಗಸ್ಟ ತಿಂಗಳಾಗಿದ್ದು, ಮಾರ್ಚ್ ಹಾಗು ಜೂನ್ ತಿಂಗಳಲ್ಲಿ ಹೆಚ್ಚು ಉತ್ತುಂಗದಲ್ಲಿರುತ್ತದೆ. 3 ರಿಂದ 5 ಮೊಟ್ಟೆಗಳನ್ನಿಡುವ ಇವುಗಳ ಮೊಟ್ಟೆಯ ಬಣ್ಣ ಕಲೆಯಿರುವ ತಿಳಿ ನೀಲಿ ಬಿಳುಪು.



**ಚೋರೆಹಕ್ಕಿ ಚಾಣ** © **ಕಾಂತರಾಜು ಡಿ.**

ಏಷ್ಯಾ, ಯುರೋಪ್, ಆಫ್ರಿಕಾ ಮತ್ತು ಕೆಲವೊಮ್ಮೆ ಉತ್ತರ ಅಮೆರಿಕಾಗಳಲ್ಲಿ ಈ ಪಕ್ಷಿಗಳು ಕಂಡುಬರುತ್ತವೆ. ಹೆಣ್ಣು ಪಕ್ಷಿ ಗಂಡು ಪಕ್ಷಿಗಿಂತ ಗಾತ್ರದಲ್ಲಿ ದೊಡ್ಡದಾಗಿರುತ್ತದೆ. ಉದ್ದನೆಯ ರೆಕ್ಕೆ ಹಾಗು ಬಾಲವನ್ನು ಹೊಂದಿರುವ ಈ ಹಕ್ಕಿಗಳು ಕಂದು ಮೈಬಣ್ಣದ ಜೊತೆಗೆ ಮೈಯ ಮೇಲ್ಭಾಗದಲ್ಲಿ ಕಪ್ಪು ಚುಕ್ಕೆಗಳನ್ನು ಹಾಗು ಕೆಳಗೆ ಕಪ್ಪು ಗೆರೆಗಳನ್ನೊಳಗೊಂಡಿದೆ. ಅವುಗಳ ಬಣ್ಣದಿಂದಲೇ ಹೆಣ್ಣು ಹಾಗು ಗಂಡು ಪಕ್ಷಿಗಳಲ್ಲಿರುವ ವ್ಯತ್ಯಾಸವನ್ನು ಹೇಳಬಹುದು. ಕಡಿಮೆ ಕಪ್ಪು ಚುಕ್ಕೆಗಳು, ಗೆರೆಗಳು ಮತ್ತು ನೀಲಿ-ಬೂದಿ ಬಣ್ಣದ ಬಾಲವನ್ನು ಹೊಂದಿದ್ದರೆ ಅವು ಗಂಡು ಹಕ್ಕಿಯೆಂದು ಗುರುತಿಸಬಹುದು. ಹೆಣ್ಣು ಹಕ್ಕಿಗಳು ಕಂದು ಬಣ್ಣದ ಗೆರೆಗಳುಳ್ಳ ಬಾಲವನ್ನು ಹೊಂದಿರುತ್ತವೆ. ಎರೆ ಹುಳು, ಇಲಿಗಳು, ಕಪ್ಪೆ, ಹಲ್ಲಿ, ಕೆಲವು ಬಗೆಯ ಕೀಟಗಳು ಹಾಗೂ ಸಣ್ಣ ಪ್ರಾಣಿಗಳನ್ನು ತಿನ್ನುವ ಇವು ಸಣ್ಣ ಹಕ್ಕಿಗಳನ್ನೂ ಬೇಟೆಯಾಡುತ್ತವೆ. ಇವುಗಳು ಸುಮಾರು 3 ರಿಂದ 7 ಮೊಟ್ಟೆಗಳನ್ನಿಟ್ಟು ಮರಿ ಮಾಡುತ್ತವೆ.



**ಬದನಿಕೆ ಹಕ್ಕಿ** © **ಕಾಂತರಾಜು ಡಿ.**

ಭಾರತ, ಶ್ರೀಲಂಕಾ, ಬಾಂಗ್ಲಾದೇಶಗಳಲ್ಲಿ ಕಂಡುಬರುವ ಈ ಸಣ್ಣ ಪಕ್ಷಿಗಳ ಆಹಾರ ಹೂವಿನ ಮಕರಂದ. ಇವು ಕ್ಷಿಪ್ರ ಗತಿಯ ಚಿಲಿಪಿಲಿ ಧ್ವನಿಯ ಕರೆಯನ್ನು ಹೊಂದಿವೆ. ಬೂದಿ ಅಥವಾ ಆಲೀವ್ ಹಸಿರು ಮೈಬಣ್ಣ ಹಾಗು ಗುಲಾಬಿ ಬಣ್ಣದ ವಕ್ರ ಕೊಕ್ಕನ್ನೂ ಇವುಗಳು ಹೊಂದಿವೆ. ಈ ಹಕ್ಕಿಗಳು ಸಾಮಾನ್ಯವಾಗಿ ಹಣ್ಣುಗಳಿರುವ ಮರದಲ್ಲಿ ನಗರದ ಉದ್ಯಾನಗಳಲ್ಲಿ ಕಾಣಸಿಗುತ್ತವೆ. ಹೂವುಗಳ ಮಕರಂದ ಹೀರುತ್ತಾ, ಸಣ್ಣ ಸಣ್ಣ ಹಣ್ಣುಗಳನ್ನು ಸೇವಿಸುತ್ತಾ ಪರಾಗಸ್ಪರ್ಶ ಕ್ರಿಯೆಗೆ ಸಹಾಯಮಾಡುತ್ತವೆ. ಇವುಗಳ ಸಂತಾನೋತ್ಪತ್ತಿಯ ಕಾಲ ಫೆಬ್ರುವರಿಯಿಂದ ಜೂನ್ ತಿಂಗಳು. ಈ ಹಕ್ಕಿಗಳು ಸಂತಾನೋತ್ಪತ್ತಿಯ ಕಾಲದಲ್ಲಿ ಸುಮಾರು 2 ರಿಂದ 3 ಮೊಟ್ಟೆಗಳನ್ನಿಟ್ಟು ಮರಿ ಮಾಡುತ್ತವೆ.

**ಚಿತ್ರ: ಕಾಂತರಾಜು ಡಿ.**

**ಲೇಖನ: ಶಾಂಭವಿ ಎನ್.**

# ನೀವೂ ಕಾನನಕ್ಕೆ ಬರೆಯಬಹುದು




ಪ್ರಪಂಚದಾದ್ಯಂತ ಪರ್ವತಗಳ ಬಗ್ಗೆ ಜಾಗೃತಿಯನ್ನು ಮೂಡಿಸಲು ಅಂತರಾಷ್ಟ್ರೀಯ ಪರ್ವತದ ದಿನವನ್ನು ಪ್ರತೀ ವರ್ಷವು ಆಚರಿಸಲಾಗುತ್ತದೆ. ಡಿಸೆಂಬರ್ 2002 ಯುನೈಟೆಡ್ ನೇಶನ್ ಜನರಲ್ ಅಸೆಂಬ್ಲಿ ರೆಸಲ್ಯೂಷನ್ 57/245 ರ ಮೂಲಕ ಡಿಸೆಂಬರ್ 11 ಅಂತರಾಷ್ಟ್ರೀಯ ಪರ್ವತ ದಿನ ಎಂದು ಘೋಷಿಸಲಾಯಿತು. ಪರಿಸರ ವ್ಯವಸ್ಥೆಯಲ್ಲಿ ಪರ್ವತಗಳು ಪ್ರಮುಖ ಪಾತ್ರ ವಹಿಸುತ್ತವೆ. ಸಿಹಿನೀರಿನ ನದಿಗಳು ಪರ್ವತ ಪ್ರದೇಶದಿಂದಲೇ ಹುಟ್ಟಿಕೊಂಡಿವೆ, ಹಾಗೂ ಮಳೆಕಾಡುಗಳಿಂದ ಹಿಡಿದು ಎತ್ತರದ ಮರುಭೂಮಿಗಳ ವರೆಗಿನ ವಿವಿಧ ಹವಾಮಾನಗಳನ್ನು ಪರ್ವತ ಪರಿಸರ ವ್ಯವಸ್ಥೆಯು ಒಳಗೊಂಡಿದೆ. ಆರೋಗ್ಯಕರ ಗಿಡಮೂಲಿಕೆಗಳು, ಔಷಧೀಯ ಸಸ್ಯಗಳು ಪರ್ವತ ಪ್ರದೇಶದಲ್ಲಿ ಕಾಣಸಿಗುತ್ತವೆ. ಪ್ರವಾಸಿಗರಿಗೆ ಇದು ಶಾಂತಿಯುತ ಸ್ಥಳವಾಗಿದೆ.

ಈ ರೀತಿಯ ಪರಿಸರದ ಬಗೆಗಿನ ಮಾಹಿತಿಯನ್ನು ಒದಗಿಸಲು ಇರುವ ಕಾನನ ಇ-ಮಾಸಿಕಕ್ಕೆ ಮುಂದಿನ ತಿಂಗಳ ಸಂಚಿಕೆಗೆ ಲೇಖನಗಳನ್ನು ಆಹ್ವಾನಿಸಲಾಗಿದೆ. ಆಸಕ್ತರು ಪರಿಸರಕ್ಕೆ ಸಂಬಂಧಿಸಿದ ಕಥೆ, ಕವನ, ಛಾಯಾಚಿತ್ರ, ಚಿತ್ರಕಲೆ, ಪ್ರವಾಸ ಕಥನಗಳನ್ನು ಕಾನನ ಮಾಸಿಕದ ಇ-ಮೇಲ್ ವಿಳಾಸಕ್ಕೆ ಕಳುಹಿಸಬಹುದು.

**ಕಾನನ ಪತ್ರಿಕೆಯ ಇ-ಮೇಲ್ ವಿಳಾಸ**: kaanana.mag@gmail.com
**ಅಂಚೆ ವಿಳಾಸ:**

Study House,

ಕಾಳೇಶ್ವರಿ ಗ್ರಾಮ,

ಆನೇಕಲ್ ತಾಲ್ಲೂಕು,

ಬೆಂಗಳೂರು ನಗರ ಜಿಲ್ಲೆ,

ಪಿನ್ ಕೋಡ್ : 560083. ಗೆ ಕಳಿಸಿಕೊಡಬಹುದು.

